ಸದನದಲ್ಲಿ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೊಂದನೆಯ ಅಧಿವೇಶನ

ಗುರುವಾರ, ದಿನಾಂಕ : 24 ನೇ ಸೆಪ್ಟೆಂಬರ್, 2020

ಡಿ. ಜೆ ಹಳ್ಳಿ ಮತ್ತು ಕೆ. ಜಿ. ಹಳ್ಳಿ ಪ್ರಕರಣದ ಕುರಿತು

ಶ್ರೀ ಸಿ. ಎಂ. ಇಬ್ರಾಹಿಂ(ವಿಧಾನಸಭೆಯಿಂದ ಚುನಾಯಿತರಾದವರು)-

ಶ್ರೀ ಎಸ್. ರವಿ(ಸ್ಥಳೀಯ ಸಂಸ್ಥೆಗಳ ಕ್ಷೇತ್ರ) –

ಶ್ರೀ ನಸೀರ್ ಅಹ್ಮದ್(ವಿಧಾನಸಭೆಯಿಂದ ಚುನಾಯಿತರಾದವರು) –

48 (524+514+633) ಗೃಹ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ –

(ಅ) ಇತ್ತೀಚೆಗೆ ನಡೆದ ಡಿ.ಜೆ. ಹಳ್ಳಿ ಮತ್ತು ಕೆ.ಜಿ. ಹಳ್ಳಿ ಗಲಭೆ ಪ್ರಕರಣದಲ್ಲಿ ಇದುವರೆವಿಗೂ ಎಷ್ಟು ಮಂದಿಯನ್ನು ಬಂಧಿಸಲಾಗಿದೆ; ಸದರಿ ಗಲಭೆಗೆ ನೈಜ ಕಾರಣಗಳೇನು;

(ಆ) ಸದರಿ ಗಲಭೆಯು ಪೂರ್ವ ನಿಯೋಜಿತವೇ; ಗಲಭೆಯು ಕೋಮುವಾದ ಗಲಭೆಯಲ್ಲವೆಂದು ಸರ್ಕಾರ ಸ್ಪಷ್ಟಪಡಿಸಿದಿದ್ದರೂ ಯಾವ ಕಾರಣಕ್ಕೆ ಈ ಗಲಭೆ ನಡೆದಿದೆ; ಇದರ ಹೊಣೆಗಾರರು ಯಾರು ಎಂಬ ಬಗೆಗಿನ ತನಿಖೆ ಯಾವ ಹಂತದಲ್ಲಿದೆ;

(ಇ) ಮೇಲಿನ ಗಲಭೆ ಪ್ರಕರಣದಲ್ಲಿ ಬಹಳಷ್ಟು ಅಮಾಯಕರನ್ನು ಕೂಡ ಬಂಧಿಸಲಾಗಿದೆ ಎಂಬ ಸ್ಥಳೀಯ ಕುಟುಂಬಗಳ ಹೇಳಿಕೆ ಬಗ್ಗೆ ಸರ್ಕಾರವು ಗಮನಿಸಿದೆಯೇ; ಹಾಗಿದ್ದಲ್ಲಿ, ಬಂಧಿತರಲ್ಲಿ ಎಷ್ಟು ಜನರನ್ನು ಅಮಾಯಕರು ಎಂದು ಬಿಡುಗಡೆ ಮಾಡಲಾಗಿದೆ; ಹಾಗೂ ಗಲಭೆಗೆ ಕಾರಣರಾದವರ ವಿರುದ್ಧ ಯಾವ ಸೆಕ್ಷನ್ ಅಡಿ ಪ್ರಕರಣ ದಾಖಲಿಸಲಾಗಿದೆ;

(ಈ) ಈ ಗಲಭೆಯಿಂದ ಸಾರ್ವಜನಿಕ ಮತ್ತು ಸರ್ಕಾರದ ಆಸ್ತಿಗಳಿಗೆ ನಷ್ಟವಾಗಿದೆಯೇ; ಹಾಗಿದ್ದಲ್ಲಿ, ಸಂಪೂರ್ಣ ವಿವರ ನೀಡುವುದು ಮತ್ತು ಇದನ್ನು ಯಾವ ರೀತಿ ಭರಿಸಲಾಗುತ್ತದೆ; ಈ ಗಲಭೆಯಿಂದ ನಷ್ಟಕ್ಕೊಳಗಾದ ಕುಟುಂಬಗಳಿಗೆ ಪರಿಹಾರವನ್ನು ನೀಡಲಾಗಿದೆಯೇ; ಹಾಗಿದ್ದಲ್ಲಿ, ಎಷ್ಟು ಕುಟುಂಬಗಳಿಗೆ ಪರಿಹಾರ ನೀಡಲಾಗಿದೆ; (ಸಂಪೂರ್ಣ ವಿವರ ನೀಡುವುದು)

(ಉ) ಈ ಗಲಭೆ ಸಮಯದಲ್ಲಿ ಕೆಲವು ಕಿಡಿಗೇಡಿಗಳು ಸಾರ್ವಜನಿಕರಿಗೆ ಸೇರಿದ ಗೃಹೋಪಯೋಗಿ ವಸ್ತುಗಳು, ದ್ವಿಚಕ್ರ ವಾಹನಗಳು ಹಾಗೂ ಸಾರ್ವಜನಿಕ ಆಸ್ತಿ ಪಾಸ್ತಿಗಳಿಗೆ ದಕ್ಕೆ ಉಂಟು ಮಾಡಿರುವ ಅಂದಾಜು ಮೊತ್ತ ಎಷ್ಟು; ಸರ್ಕಾರ ಈ ಬಗ್ಗೆ ಏನಾದರೂ ಕ್ರಮ ಕೈಗೊಂಡು ಪರಿಹಾರ ಒದಗಿಸಲಾಗಿದೆಯೇ? (ವಿವರ ನೀಡುವುದು)

(ಊ) ಐ.ಎಂ.ಎ. ಪ್ರಕರಣವು ಸದ್ಯ ಯಾವ ಹಂತದಲ್ಲಿದೆ; ವಂಚನೆಗೆ ಒಳಗಾದವರಿಗೆ ಪರಿಹಾರ ಒದಗಿಸುವ ಬಗ್ಗೆ ಸರ್ಕಾರ ಕೈಗೊಂಡಿರುವ ಕ್ರಮವೇನು? (ಸಂಪೂರ್ಣ ಮಾಹಿತಿ ನೀಡುವುದು)